# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1243
2. ಮಾನ್ಯ ~~ವಿಧಾನ ಪರಿಷತ್ತಿನ~~ ಸದಸ್ಯರ ಹೆಸರು : ಶ್ರೀ ಬಿ.ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 21.12.2018
4. ಉತ್ತರಿಸುವ ಸಚಿವರು : ಮಾನ್ಯ ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮುಂಗಾರು ಹಂಗಾಮಿನಲ್ಲಿ ಬಿತ್ತನೆಯಾದ ತೊಗರಿ ರಾಶಿಯಾಗಿ ಮಾರುಕಟ್ಟೆಗೆ ಬರಲು ಪ್ರಾರಂಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಬೆಂಬಲ ಬೆಲೆಯಲ್ಲಿ ತೊಗರಿ ಖರೀದಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ದಿನಾಂಕ:24.11.2018 ರಂದು ಜರುಗಿದ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪ ಸಮಿತಿ ಸಭೆಯಲ್ಲಿ ಚರ್ಚಿಸಿ ಪ್ರಮುಖ ಮಾರುಕಟ್ಟೆಗಳಲ್ಲಿ ತೊಗರಿ ಉತ್ಪನ್ನದ ಬೆಲೆಯು ಕೇಂದ್ರ ಸರ್ಕಾರ ಘೋಷಿಸಿರುವ ಬೆಂಬಲ ಬೆಲೆಗಿಂತ ಕಡಿಮೆ ಧಾರಣೆಯಲ್ಲಿ ಮಾರಾಟವಾಗುತ್ತಿರುವ ಹಿನ್ನೆಲೆಯಲ್ಲಿ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ತೊಗರಿ ಖರೀದಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲು ಅನುಮೋದನೆಯಾಗಿರುತ್ತದೆ. ಇದರನ್ವಯ, ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ. |
| ಇ | ಎಷ್ಟು ಖರೀದಿ ಕೇಂದ್ರಗಳನ್ನು ಮತ್ತು ಯಾವ ಯಾವ ಪ್ರದೇಶಗಳಲ್ಲಿ ತೆರೆಯಲು ಸರ್ಕಾರ ಕ್ರಮ ಕೈಗೊಂಡಿದೆ; | ಕೇಂದ್ರ ಸರ್ಕಾರದಿಂದ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ತೊಗರಿ ಖರೀದಿಸಲು ಅನುಮೋದನೆ ದೊರೆತ ನಂತರ ಮುಂದಿನ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪ ಸಮಿತಿಯ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಿದಂತೆ ಕ್ರಮವಹಿಸಲಾಗುವುದು. |
| ಈ | ಕೇಂದ್ರ ಸರ್ಕಾರದ ಬೆಂಬಲ ಬೆಲೆ ಎಷ್ಟು; ರಾಜ್ಯ ಸರ್ಕಾರ ಎಷ್ಟು ಪ್ರೋತ್ಸಾಹಧನ ನಿಗಧಿಪಡಿಸುವುದು ಮತ್ತು ಯಾವಾಗ ನಿಗಧಿ ಪಡಿಸುವುದು; | 2018-19ನೇ ಸಾಲಿನ ಕೇಂದ್ರ ಸರ್ಕಾರವು ಎಫ್.ಎ.ಕ್ಯೂ ಗುಣಮಟ್ಟದ ತೊಗರಿ ಪ್ರತಿ ಕ್ವಿಗೆ ರೂ.5,675/- ಘೋಷಿಸಿರುತ್ತದೆ. ರಾಜ್ಯ ಸರ್ಕಾರದ ವತಿಯಿಂದ ಪ್ರೋತ್ಸಾಹಧನ ನೀಡುವ ಕುರಿತಂತೆ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪ ಸಮಿತಿ ಸಭೆಯ ಮುಂದೆ ಮಂಡಿಸಿ, ಸಭೆಯ ತೀರ್ಮಾನದನ್ವಯ ಕ್ರಮವಹಿಸಲಾಗುವುದು. |
| ಉ | ಸರ್ಕಾರದಿಂದ ತೊಗರಿ ಖರೀದಿ ಪ್ರಕ್ರಿಯೆಯನ್ನು ಎಂದಿನಿಂದ ಪ್ರಾರಂಭಿಸಲಾಗುವುದು ಮತ್ತು ಈ ವರ್ಷ ಎಷ್ಟು ಪ್ರಮಾಣದ ತೊಗರಿ ಖರೀದಿಸಲಾಗುವುದು? (ವಿವರ ನೀಡುವುದು) | 2018-19ನೇ ಸಾಲಿನ ತೊಗರಿಯನ್ನು ಅಂದಾಜು 15.60 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಅಂದಾಜು 11.34 ಲಕ್ಷ ಮೆ.ಟನ್ ಉತ್ಪಾದನೆಯನ್ನು ಬೆಳೆದರ್ಶಕ ಸಮೀಕ್ಷೆಯಂತೆ ನಿರೀಕ್ಷಿಸಲಾಗಿದೆ. ಕೇಂದ್ರ ಸರ್ಕಾರದ ಬೆಂಬಲ ಬೆಲೆ ಯೋಜನೆಯ ಮಾರ್ಗಸೂಚಿಗಳನ್ವಯ ರಾಜ್ಯದಲ್ಲಿ ತೊಗರಿ ಉತ್ಪಾದನೆಯ ಶೇ.25%ರಷ್ಟು ಪ್ರಮಾಣವನ್ನು ಖರೀದಿಸಲು ಅವಕಾಶವಿರುತ್ತದೆ. ಕೇಂದ್ರ ಸರ್ಕಾರದಿಂದ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲು ಅನುಮೋದನೆ ದೊರೆತ ನಂತರ ಖರೀದಿ ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು. |

ಸಂಖ್ಯೆ: ಸಇ 528 ಎಂಆರ್ಇ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.